ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 1, March-April 2024, Pp. 73-77
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಭಾರತದ ವಿದೇಶಾಂಗ ನೀತಿಗೆ ನೆಹರುರವರ ಕೊಡುಗೆಗಳು: ಒಂದು ಅಧ್ಯಯನ

**ಮಂಜುನಾಥ ಸ್ವಾಮಿ ಎಸ್. ಎಂ**

ಸಹಾಯಕ ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು, ರಾಜ್ಯಶಾಸ್ತ್ರ ವಿಭಾಗ, ಸ್ನಾತಕ ಮತ್ತು ಸ್ನಾತಕೋತ್ತರ ಅಧ್ಯಯನ ಕೇಂದ್ರ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೃಷ್ಣರಾಜಪೇಟೆ, ಮಂಡ್ಯ

***Abstract:***

*ಸ್ವಾತಂತ್ರ್ಯ ನಂತರ ದೇಶದ ಮೊದಲ ಪ್ರಧಾನಿಯಾಗಿ ಜವಾಹರ್‌ಲಾಲ್ ನೆಹರು, ಅವರು ಭಾರತದ ವಿದೇಶಾಂಗ ನೀತಿಗೆ ಭದ್ರ ಬುನಾದಿ ಹಾಕಿದರು. ಸ್ವಾತಂತ್ರ್ಯ ನಂತರ ಹಲವಾರು ಆಂತರಿಕ ಮತ್ತು ಬಾಹ್ಯ ಪರಿಸ್ಥಿತಿಯನ್ನು ಬಹಳ ಎಚ್ಚರಿಕೆಯಿಂದ ನಿರ್ವಹಿಸಿದರು. ಪ್ರಮುಖವಾಗಿ ಬಾಹ್ಯ ಪರಿಸ್ಥಿತಿಯನ್ನು ಸುಧಾರಿಸುವ ಕಡೆ ತಮ್ಮ ಗಮನ ನೀಡಿ ಅಂತರಾಷ್ಟ್ರೀಯ ಮಟ್ಟದಲ್ಲಿ ಭಾರತಕ್ಕೆ ತನ್ನದೇ ಆದ ಗೌರವ ಸ್ಥಾನಮಾನ ಮಹತ್ವ ದೊರಕುವಂತೆ ಮಾಡಿದರು. ಪ್ರಸ್ತುತ ಲೇಖನದಲ್ಲಿ ನೆಹರು ಅವರ ವಿದೇಶಾಂಗ ನೀತಿ ಹಾಗೂ ಭಾರತದ ವಿದೇಶಾಂಗ ನೀತಿಯ ಮೇಲೆ ಅವರ ಪ್ರಭಾವವನ್ನು ವಿಶ್ಲೇಷಣೆ ಮಾಡಲಾಗಿದೆ.*

**Keywords:** *ವಿದೇಶಾಂಗ ನೀತಿ, ಪಂಚಶೀಲ ತತ್ವ, ಅಲಿಪ್ತ ನೀತಿ, ವರ್ಣಭೇದ ನೀತಿ, ಸಾಮ್ರಾಜ್ಯಶಾಹಿ.*

## ಪೀಠಿಕೆ

ಪ್ರಜಾಸತ್ತಾತ್ಮಕ ಗಣರಾಜ್ಯವಾಗಿ ವಿಶ್ವದಲ್ಲಿ ಗೋಚರಿಸುವಂತೆ ಮಾಡಿ 'ಬದುಕು ಬದುಕಲು ಬಿಡು' ಎಂಬ ನಾಣ್ಣುಡಿಯಂತೆ ಅನೇಕ ರಾಷ್ಟ್ರಗಳ ಮುಖ್ಯವಾಗಿ ಹಿಂದುಳಿದ ರಾಷ್ಟ್ರಗಳ ಒಕ್ಕೂಟದ ಅಭಿವೃದ್ಧಿಗೆ ಶ್ರಮಿಸಿದರು ಯಾವುದೇ ಸೈದ್ಧಾಂತಿಕ ಬಣಗಳ ಗುಂಪಿಗೆ ಹೋಗದೆ ತಟಸ್ಥ ನೀತಿಯನ್ನು ಅನುಸರಿಸಿದರು. ಸಾಮ್ರಾಜ್ಯಶಾಹಿ ಮತ್ತು ವಸಾಹತು ಶಾಹಿಗೆ ತೀವ್ರ ವಿರೋಧವನ್ನು ವ್ಯಕ್ತಪಡಿಸುತಿದ್ದರು. ಭಾರತದ ಸಾಂಪ್ರಾದಾಯಿಕ ಪರಂಪರೆಗೆ ಗೌರವ ಬರುವಂತೆ ಮಾಡಿದರು, ಶಾಂತಿ ಮಂತ್ರವನ್ನು ಜಗತ್ತಿಗೆ ಎತ್ತಿ ತೋರಿಸಿದರು ಪ್ರಸ್ತುತ ಕಾಲಕ್ಕೂ ಇವರ ವಿದೇಶಾಂಗ ನೀತಿಗಳು ಅತ್ಯಂತ ಸೂಕ್ತವಾಗಿದೆ.

ಸ್ವಾತಂತ್ರ್ಯ ನಂತರ ಹಲವಾರು ಆಂತರಿಕ ಮತ್ತು ಬಾಹ್ಯ ಪರಿಸ್ಥಿತಿಯನ್ನು ಬಹಳ ಎಚ್ಚರಿಕೆಯಿಂದ ನಿರ್ವಹಿಸಿದರು. ಪ್ರಮುಖವಾಗಿ ಬಾಹ್ಯ ಪರಿಸ್ಥಿತಿಯನ್ನು ಸುಧಾರಿಸುವ ಕಡೆ ತಮ್ಮ ಗಮನ ನೀಡಿದ್ದಾರೆ.

## ಅಧ್ಯಯನದ ಉದ್ದೇಶ

- ನೆಹರು ಅವರ ವಿದೇಶಾಂಗ ನೀತಿಯನ್ನು ವಿಶ್ಲೇಷಿಸುವುದು
- ಭಾರತದ ವಿದೇಶಾಂಗ ನೀತಿಯ ಮೇಲೆ, ನೆಹರು ಅವರ ಪ್ರಭಾವವನ್ನು ಅಧ್ಯಯನ ಮಾಡುವುದು.

## ಸಂಶೋಧನಾ ವಿಧಾನ

ಈ ಲೇಖನವು ವಿವರಣಾತ್ಮಕ ಮತ್ತು ವಿಶ್ಲೇಷಣಾತ್ಮಕ ವಿಧಾನವನ್ನು ಒಳಗೊಂಡಿದೆ. ಅಧ್ಯಯನಕ್ಕೆ ಅನುಗುಣವಾಗಿ ಆನುಷಂಗಿಕ ಮಾಹಿತಿಯನ್ನು ಬಳಸಿಕೊಳ್ಳಲಾಗಿದೆ.

***Please cite this article as:*** ಮಂಜುನಾಥ ಸ್ವಾಮಿ ಎಸ್. ಎಂ. (2024). ಭಾರತದ ವಿದೇಶಾಂಗ ನೀತಿಗೆ ನೆಹರುರವರ ಕೊಡುಗೆಗಳು: ಒಂದು ಅಧ್ಯಯನ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(1), 73–77.

**ನೆಹರು ಅವರ ವಿದೇಶಾಂಗ ನೀತಿಯ ಮೂಲತತ್ವಗಳು**

***ಪಂಚಶೀಲತತ್ವ ಮತ್ತು ನೆಹರು***

ಪಂಚಶೀಲತತ್ವವು ಶಾಂತಿಯುತ ಸಹಬಾಳ್ವೆಯ ಐದು ತತ್ವಗಳಾಗಿವೆ, ಆರ್ಥಿಕ ಮತ್ತು ಭದ್ರತಾ ಸಹಕಾರವನ್ನು ಹೆಚ್ಚಿಸಲು ಭಾರತ ಮತ್ತು ಚೀನಾ ನಡುವಿನ ಪ್ರಮುಖ ಸಂಬಂಧಗಳಲ್ಲಿ ಒಂದಾಗಿದೆ, ವಸಾಹತುಶಾಹಿಯ ನಂತರ ಹೊಸದಾಗಿ ಸ್ವತಂತ್ರ್ಯವಾಗಿರುವ ರಾಷ್ಟ್ರಗಳ ಅಂತರಾಷ್ಟ್ರೀಯ ಸಂಬಂಧಗಳಿಗೆ ಹೊಸ ಮತ್ತು ಹೆಚ್ಚು ತಾತ್ವಿಕ ವಿಧಾನವನ್ನು ಅಭಿವೃದ್ಧಿ ಪಡಿಸಲು ಸಾಧ್ಯವಾಗುತ್ತದೆ. ಭಾರತದ ವಿದೇಶಾಂಗ ನೀತಿಯ ಸ್ಥಾಪಕರಾದ ನೆಹರುರವರು ತಮ್ಮ ವಿದೇಶಾಂಗ ನೀತಿ ಯೋಜನೆಯಲ್ಲಿ ವಿಶ್ವಶಾಂತಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿದರು. ಭಾರತವು ಎಲ್ಲಾ ದೇಶಗಳೊಂದಿಗೆ ವಿಶೇಷವಾಗಿ ಮುಂದುವರಿದ ರಾಷ್ಟ್ರಗಳು ಮತ್ತು ನೆರೆಹೊರೆಯ ರಾಷ್ಟ್ರಗಳೊಂದಿಗೆ ಶಾಂತಿಯುತ ಮತ್ತು ಸೌಹಾರ್ದಯುತ ಸಂಬಂಧಗಳನ್ನು ಬಯಸಿತು, ಚೀನಾದೊಂದಿಗೆ ಶಾಂತಿ ಒಪ್ಪಂದಕ್ಕೆ ಸಹಿ ಹಾಕುವಾಗ ಪಂಚಶೀಲ ಎಂದು ಕರೆಯಲ್ಪಡುವ ಐದು ತತ್ವಗಳನ್ನು ಉಭಯ ರಾಷ್ಟ್ರಗಳು ಪ್ರತಿಪಾದಿಸಿದರು. ಡಿಸೆಂಬರ್ 31, 953 ರಂದು ಟಿಬಿಟಿಯನ್ ವ್ಯಾಪಾರ ಮಾತುಕತೆಗೆ ಭಾರತೀಯ ನಿಯೋಗವನ್ನು ಸ್ವೀಕರಿಸುವಾಗ ಚೀನಾದೊಂದಿಗೆ ಜೂನ್ 18, 1954ರಂದು ದೆಹಲಿಯಲ್ಲಿ ಜಂಟಿ ಹೇಳಿಕೆಯನ್ನು ಈ ಪಂಚಶೀಲ ತತ್ವಗಳನ್ನು ಭಾರತದ ಪ್ರಧಾನ ಮಂತ್ರಿ ಜವಾಹರ್‌ಲಾಲ್ ನೆಹರ್ ಮತ್ತು ಪ್ರೀಮಿಯರ್ ಎಸ್ ಲಾಯ್ ಅವರು ಒತ್ತಿ ಹೇಳಿದರು. ಶ್ರೀಲಂಕಾದ ಕೊಲಂಬೊದಲ್ಲಿ ನೆಹರು ಏಷ್ಯಾದ ಪ್ರಧಾನಮಂತ್ರಿಗಳ ಸಮ್ಮೇಳನದಲ್ಲಿ ಮಾಡಿದ ಭಾಷಣದಲ್ಲಿ ನೆಹರು ಹೀಗೆ ಹೇಳಿದರು, ಈ ತತ್ವಗಳನ್ನು ಪರಸ್ಪರ ಗುರುತಿಸಿದರೆ ಎಲ್ಲಾ ದೇಶಗಳ ಸಂಬಂಧಗಳಲ್ಲಿ ಯಾವುದೇ ಘರ್ಷಣೆಯಾಗುವುದಿಲ್ಲ ಮತ್ತು ಯಾವುದೇ ಯುದ್ದಗಳು ಸಂಭವಿಸುವುದಿಲ್ಲ, ಇಂಡೋನೇಷ್ಯಾದ ಬಾಡುಂಗ್‌ನಲ್ಲಿ ನಡೆದ ಐತಿಹಾಸಿಕ ಏಷ್ಯಾನ್ ಆಫ್ರಿಕನ್ ಸಮ್ಮೇಳನದಲ್ಲಿ 1955ರಲ್ಲಿ ಏಪ್ರಿಲ್‌ನಲ್ಲಿ ಹೊರಡಿಸಲಾದ ಶಾಂತಿಯುತ ಸಹಭಾಳ್ವೆಯ 10 ತತ್ವಗಳ ಹೇಳಿಕೆಯಲ್ಲಿ ಈ ಪಂಚಶೀಲ ತತ್ವಗಳನ್ನು ಸಂಯೋಜಿಸಲಾಗಿದೆ. ಪಂಚಶೀಲ ತತ್ವಗಳು ಭಾರತದ ದ್ವಿಪಕ್ಷೀಯ ಸಂಬಂಧಗಳ ಮಾರ್ಗದರ್ಶಿ ತತ್ವವಾಗಿದೆ, ಪಂಶೀಲತತ್ವವು ವಿದೇಶಾಂಗ ನೀತಿಯ ಪ್ರಮುಖ ತತ್ವವಾಗಿದೆ.

ಪಂಚಶೀಲ ತತ್ವಗಳು ಯಾವುವೆಂದರೆ

- ಪರಸ್ಪರ ಪ್ರಾದೇಶಿಕ ಸಮಗ್ರತೆ ಮತ್ತು ಸಾರ್ವಭೌಮತ್ವಕ್ಕೆ ಪರಸ್ಪರ ಗೌರವ ನೀಡುವುದು.
- ಪರಸ್ಪರ ಆಕ್ರಮಣ ಮಾಡದಿರುವುದು
- ಪರಸ್ಪರ ಆಂತರಿಕ ವ್ಯವಹಾರಗಳಲ್ಲಿ ಹಸ್ತಕ್ಷೇಪ ಮಾಡದಿರುವುದು
- ಸಮಾನತೆ ಮತ್ತು ಪರಸ್ಪರ ಪ್ರಯೋಜನಕ್ಕಾಗಿ ಸಹಕಾರ ನೀಡುವುದು
- ಶಾಂತಿಯುತ ಸಹಭಾಳ್ವೆಯನ್ನು ಸಾಧಿಸುವುದು.

ಈ ಮೇಲ್ಕಂಡ ತತ್ವಗಳು ರಾಜ್ಯದ ಸಾರ್ವಭೌಮತ್ವದ ವೆಸ್ಟ್ ಫಾಲಿಯನ್ ಒಪ್ಪಂದ ರೂಢಿ–ಸಂಪ್ರಾದಾಯಗಳ ವ್ಯಾಖ್ಯಾನವಾಗಿದೆ.

***ಅಲಿಪ್ತ ನೀತಿ ಮತ್ತು ನೆಹರು***

ಅಲಿಪ್ತ ನೀತಿಯು ಭಾರತದ ವಿದೇಶಾಂಗನೀತಿಯ ಪ್ರಮುಖ ಲಕ್ಷಣವಾಗಿದೆ, 1950ರಲ್ಲಿ ವಿಶ್ವಸಂಸ್ಥೆಯಲ್ಲಿ ಭಾರತದಲ್ಲಿ ಮತ್ತು ಯುಗೋಸ್ಲೋವಿಯಾದಿಂದ 'ಅಲಿಪ್ತತೆ' ಎಂಬ ಪದವನ್ನು ಮೊದಲ ಬಾರಿಗೆ ಬಳಸಲಾಯಿತು. ಇವೆರಡೂ ದೇಶಗಳು ಕೊರಿಯನ್ ಯುದ್ದವನ್ನು ಒಳಗೊಂಡ ಬಹು ಮೈತ್ರಿಕೂಟಗಳಲ್ಲಿ ಯಾವುದೇ ಪಕ್ಷದೊಂದಿಗೆ ತಮ್ಮನ್ನು ತಾವು ಹೊಂದಿಸಿಕೊಳ್ಳಲು ನಿರಾಕರಿಸಿದವು. ಅಲಿಪ್ತ ನೀತಿ ಶ್ರೇಷ್ಠತೆಯಲ್ಲಿ ತಟಸ್ಥವಾಗಿರುವ ಋಣಾತ್ಮಕ ನೀತಿಯಾಗಿರಲಿಲ್ಲ, ಶೀತಲ ಸಮರದ ಸಂದರ್ಭದಲ್ಲಿ ಯಾವುದೇ ಸೈದ್ದಾಂತಿಕ ವಿಚಾರಗಳಿಗೆ ಒಳಗಾಗದೆ,

ತಟಸ್ಥವಾಗಿರುವುದು ಜೊತೆಗೆ ಅಂತರಾಷ್ಟ್ರೀಯ ವಿಷಯಗಳ ಮೇಲೆ ಸ್ವತಂತ್ರ ನಿಲುವನ್ನು ತೆಗೆದುಕೊಳ್ಳುವುದನ್ನು ಪ್ರತಿಪಾದಿಸುತ್ತದೆ ಮತ್ತು ಯಾವುದೇ ಮಿಲಿಟರಿ ಕೂಟಕ್ಕೆ ಸೇರ್ಪಡೆಯಾಗದಿರುವುದು ಭಾರತದ ಅಲಿಪ್ತ ನೀತಿಯು ಎಷ್ಯಾ ಆಫ್ರಿಕಾ ಮತ್ತು ಲ್ಯಾಟಿನ್‌ಅಮೇರಿಕಾದ ರಾಷ್ಟ್ರಗಳಲ್ಲಿ ಅನೇಕ ಬೆಂಬಲಿಗರನ್ನು ಪಡೆದುಕೊಂಡಿತು, ಏಕೆಂದರೆ ಶೀತಲಸಮರ ಒತ್ತಡಗಳು ಮತ್ತು ಉದ್ವಿಗ್ನತೆಯ ನಡುವೆ ತಮ್ಮ ವಿದೇಶಾಂಗನೀತಿಯ ಸ್ವಾತಂತ್ರವನ್ನು ರಕ್ಷಿಸಲು ಇದು ಅವಕಾಶವನ್ನು ಒದಗಿಸಿತು.

ಅಲಿಪ್ತ ಚಳುವಳಿಯನ್ನು ಜನಪ್ರಿಯಗೊಳಿಸುವಲ್ಲಿ ಮತ್ತು ಕ್ರೋಢೀಕರಿಸುವಲ್ಲಿ ಭಾರತ ಪ್ರಮುಖ ಪಾತ್ರವಹಿಸಿದೆ. ಏಷ್ಯಾದ ಐಕ್ಯತೆಯನ್ನು ರೂಪಿಸುವ ಸಲುವಾಗಿ ನೆಹರು ನಾಯಕತ್ವದಲ್ಲಿ ನವದೆಹಲಿಯಲ್ಲಿ ಸಮ್ಮೇಳನ ಏರ್ಪಡಿಸಿತು. ಭಾರತವು ಇತರ ದೇಶಗಳಲ್ಲಿನ ವಸಾಹತುಶಾಹಿ ಆಡಳಿತದ ವಿರುದ್ಧ ದೃಢವಾಗಿ ಹೋರಾಟ ಮಾಡಿತು. ಇಡೋನೇಷ್ಯಾದ ಸ್ವಾತಂತ್ರ್ಯದ ವಿಷಯಕ್ಕೆ ಸಂಬಂಧಿಸಿದಂತೆ 1949ರಲ್ಲಿ ಭಾರತದ ಏಷ್ಯಾ ಸಂಬಂಧಗಳ ಸಮ್ಮೇಳನವನ್ನು ಕರೆಯಿತು. ಏಷ್ಯಾ ಮತ್ತು ಆಫ್ರಿಕಾದ 29ದೇಶಗಳ ಸಮ್ಮೇಳನವನ್ನು 1955ರಲ್ಲಿ ಬಾಡುಂಗ್‌ನಲ್ಲಿ ಆಯೋಜಿಸಲಾಯಿತು, ಇದು 'ಬಾಡುಂಗ್' ಸಮ್ಮೇಳನ ಎಂದು ಪ್ರಸಿದ್ಧಿ ಪಡೆಯಿತು. ಈ ಸಮ್ಮೇಳನವು ಪಂಚಶೀಲ ತತ್ವಗಳನ್ನು ಒಳಗೊಂಡಿರುವ 10 ಮೂಲಭೂತ ತತ್ವಗಳನ್ನು ಘೋಷಿಸಿಲಾಯಿತು. ವಸಾಹತುಶಾಹಿ ವಿಮೋಚನೆ, ಶಾಂತಿ ಮತ್ತು ಅಭಿವೃದ್ಧಿಶೀಲ ರಾಷ್ಟ್ರಗಳ ನಡುವೆ ಸಾಂಸ್ಕೃತಿಕ, ಆರ್ಥಿಕ ಮತ್ತು ರಾಜಕೀಯ ಸಹಕಾರಕ್ಕಾಗಿ ಒಟ್ಟಾಗಿ ಕೆಲಸಮಾಡಲು ಒಪ್ಪಿದರು. ಬಾಡುಂಗ್ ಸಮ್ಮೇಳನವು NAMಗೆ ಪೂರ್ವಭಾವಿಯಾಗಿತ್ತು. 1961ರಲ್ಲಿ ಬಿಲ್‌ಗ್ರೇಡ್ನಲ್ಲಿ ತನ್ನ ಮೊದಲ ಶೃಂಗಸಭೆಯನ್ನು ನಡೆಸಿತು, ಇಲ್ಲಿಯವರೆಗೆ ಭಾರತವು ತನ್ನದೇಯಾದ ಮಹತ್ವವನ್ನು ಇಡಿ ಜಗತ್ತಿಗೆ ಸಾರಿದೆ. ಶೀತಲ ಸಮರದ ಅಂತ್ಯದ ನಂತರ ಅಲಿಪ್ತ ಚಳುವಳಿಯು ತನ್ನನ್ನು ತಾನೇ ಮರು ವ್ಯಾಖ್ಯಾನಿಸಲು ಮತ್ತು ಹೊಸ ವಿಶ್ವ ವ್ಯವಸ್ಥೆಯಲ್ಲಿ ತನ್ನ ಗುರಿ ಉದ್ದೇಶವನ್ನು ಮರುಶೋಧಿಸಲು ಭಾವಿಸಿದೆ.

***ವಸಾಹತುಶಾಹಿ, ಸಾಮ್ರಾಜ್ಯಶಾಹಿ, ವರ್ಣಭೇದನೀತಿಯ ಬಗೆಗಿನ ನೆಹರುರವರ ವಿಚಾರಧಾರೆಗಳು:***

ಭಾರತವು ವಸಾಹತುಶಾಹಿ, ಸಾಮ್ರಾಜ್ಯಶಾಹಿ ಮತ್ತು ವರ್ಣಭೇದನೀತಿಗೆ ವಿರುದ್ಧವಾಗಿದೆ, ಜೊತೆಗೆ ಇದನ್ನು ತನ್ನ ವಿದೇಶಾಂಗ ನೀತಿಯನ್ನಾಗಿ ರೂಪಿಸಿಕೊಂಡಿದೆ. ಇದಕ್ಕೆ ಪ್ರಮುಖ ಕಾರಣ ನೆಹರುರವರು. ಭಾರತದ ವಸಾಹತುಶಾಹಿ ಮತ್ತು ವರ್ಣಭೇದನೀತಿಯ ಕಹಿ ಅನುಭವವನ್ನು ಅನುಭವಿಸಿದ್ದರಿಂದ ಈ ಅನಿಷ್ಟ ನೀತಿಗಳಿಗೆ ವಿರುದ್ಧವಾಗಿತ್ತು.

ಭಾರತವು ಅಂತರಾಷ್ಟ್ರೀಯ ಶಾಂತಿಗೆ ವಸಾಹತುಶಾಹಿ, ಸಾಮ್ರಾಜ್ಯಶಾಹಿ, ವರ್ಣಭೇದ ನೀತಿಯು ಧಕ್ಕೆಯನ್ನು ಉಂಟುಮಾಡುತ್ತದೆ ಎಂದು ಪರಿಗಣಿಸುತ್ತದೆ. 1946ರಲ್ಲಿ ನಡೆದ ವಿಶ್ವಸಂಸ್ಥೆಯ ಸಾಮಾನ್ಯ ಸಭೆಯಲ್ಲಿ ವರ್ಣಭೇದನೀತಿಯ ವಿರುದ್ಧ ಧ್ವನಿಯನ್ನು ಏತ್ತಿತು. ಜೂತೆಗೆ ಇಂಡೋನೇಷ್ಯಾದ ಸ್ವಾತಂತ್ರ್ಯಕ್ಕಾಗಿ ಕರೆಯನ್ನು ನೀಡಿತು. ಈ ಉದ್ದೇಶಕ್ಕಾಗಿ ಏಷ್ಯಾದ ರಾಷ್ಟ್ರಗಳ ಸಮ್ಮೇಳನವನ್ನು ಆಯೋಜಿತು. ಅಲಿಪ್ತ ನೀತಿಯ ಚಳುವಳಿ ಮತ್ತು ಇತರ ಅಂತರಾಷ್ಟ್ರೀಯ ಮಟ್ಟದ ವೇದಿಕೆಗಳ ಮೂಲಕ ಭಾರತದ ನಿರಂತರವಾದ ಪ್ರಯತ್ನಗಳ ಫಲದಿಂದಾಗಿ ಆಫ್ರಿಕಾದ 14 ರಾಷ್ಟ್ರಗಳು 1964ರಲ್ಲಿ ವಸಾಹತುಶಾಹಿ ಕಪಿಮುಷ್ಠಿಯಿಂದ ಬಿಡುಗಡೆ ಗೊಂಡವು. ದಕ್ಷಿಣ ಆಫ್ರಿಕಾದಲ್ಲಿ ವರ್ಣಭೇದ ನೀತಿಯ ಪಿಡುಗನ್ನು ಕೊನೆಗಾಣಿಸಲು ಭಾರತ ನಿರಂತರವಾದ ಪ್ರಯತ್ನವನ್ನು ಮಾಡುತ್ತ ಬಂದಿತು. ದಕ್ಷಿಣ ಆಫ್ರಿಕಾದ ಆಕ್ರಮಣಕ್ಕೆ ಬಲಿಯಾದ ರಾಷ್ಟ್ರಗಳಿಗೆ ಸಹಾಯ ಮಾಡುವ ಸಲುವಾಗಿ ಅಲಿಪ್ತ

ಚಳುವಳಿಯು 1986ರಲ್ಲಿ ಆಫ್ರಿಕಾದ ನಿಧಿಯನ್ನು ಸ್ಥಾಪನೆ ಮಾಡಲಾಯಿತು. ಈ ನಿಧಿಗೆ ಭಾರತ ಉದರಾವಾದ ಕೊಡುಗೆಯನ್ನು ನೀಡಿತು. 1990ರಲ್ಲಿ ವರ್ಣಭೇದ ನೀತಿಯ ಅಂಶವು ಭಾರತದ ವಿದೇಶಾಂಗ ನೀತಿಗೆ ಉತ್ತಮ ಯಶಸ್ಸನ್ನು ಸಾಧಿಸತೊಡಗಿತು.

***ಅಂತರಾಷ್ಟ್ರೀಯ ವಿವಾದಗಳ ಶಾಂತಿಯುತ ಇತ್ಯರ್ಥ ಮತ್ತು ನೆಹರು***

ಭಾರತದ ವಿದೇಶಾಂಗ ನೀತಿಯ ಪ್ರಮುಖ ವಿಚಾರವೆಂದರೆ, ಅಂತರಾಷ್ಟ್ರೀಯ ವಿವಾದಗಳ ಶಾಂತಿಯುತ ಇತ್ಯರ್ಥದಲ್ಲಿ ಅಚಲವಾದ ನಂಬಿಕೆಯನ್ನು ಹೊಂದಿದೆ. ಭಾರತ ಸಂವಿಧಾನದ 4ನೇ ಭಾಗವಾದ ರಾಜ್ಯನಿರ್ದೇಶಕ ತತ್ವಗಳಲ್ಲಿ 51ನೇ ವಿಧಿ ಇದನ್ನು ಸ್ಪಷ್ಟ ಪಡಿಸುತ್ತದೆ. ಭಾರತ ಯುಗೊಸ್ಲಾವಿಯ ಮತ್ತು ಸ್ವೀಡನ್ ಜಂಟಿಯಾಗಿ ಮಂಡಿಸಿ ಶಾಂತಿಯುತ ಸಹಬಾಳ್ವೆಯ ಕುರಿತಾದ ನಿರ್ಣಯವನ್ನು 1957ರಲ್ಲಿ ವಿಶ್ವಸಂಸ್ಥೆಯ ಸಾಮಾನ್ಯ ಸಭೆಯು ಸರ್ವಾನುಮತದಿಂದ ಅಂಗೀಕರಿಸಿತು. ಕೋರಿಯಾ ಬಿಕ್ಕಟ್ಟಿನ ಸಂದರ್ಭದಲ್ಲಿ ಭಾರತವು ಪ್ರಮುಖವಾದ ಪಾತ್ರವನ್ನು ವಹಿಸಿದೆ. ಪ್ಯಾಲೆಸ್ಟೈನ್ ಸಮಸ್ಯೆ, ಕಾಶ್ಮೀರ ಸಮಸ್ಯೆ, ನೆರೆರಾಷ್ಟ್ರಗಳೊಂದಿಗೆ ಗಡಿ ವಿವಾದಗಳು ಮತ್ತು ಇತರ ವಿವಾದಗಳನ್ನು ಮಾತುಕತೆಯ ಮೂಲಕ ಬಗೆಹರಿಸಿಕೊಳ್ಳಲು ಪ್ರಯತ್ನಿಸಿದೆ. ಇರಾನ್ ಪರಮಾಣು ಸಮಸ್ಯೆಯ ಶಾಂತಿಯುತ ಇತ್ಯರ್ಥದ ಪರವಾಗಿದೆ, ಅಂತರಾಷ್ಟ್ರೀಯ ಮಟ್ಟದ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಭಾರತ ಯಾವಾಗಲೂ ವಿದೇಶಿ ಮಿಲಿಟರಿ ಸಂಘಟನೆಯನ್ನು ವಿರೋಧಿಸುತ್ತಾ ಬಂದಿದೆ, ಈ ತತ್ವವು ಭಾರತದ ವಿದೇಶಾಂಗ ನೀತಿಯ ಮೂಲ ಆಧಾರವಾಗಿದೆ.

***ವಿಶ್ವಸಂಸ್ಥೆ ಅಂತರಾಷ್ಟ್ರೀಯ ಕಾನೂನು ನ್ಯಾಯಯುತ ಸ್ಥಾನಮಾನದ ಬಗೆಗಿನ ನೆಹರುರವರ ವಿಚಾರಗಳು***

ಭಾರತವು ವಿಶ್ವಸಂಸ್ಥೆಯಲ್ಲಿ ಅಚಲವಾದ ನಂಬಿಕೆ ಹೊಂದಿದೆ, ಇದೇ ಕಾರಣದಿಂದಾಗಿ ಕಾಶ್ಮೀರ ಸಮಸ್ಯೆಯನ್ನು ವಿಶ್ವಸಂಸ್ಥೆಗೆ ತೆಗೆದುಕೊಂಡುಹೋಗಿತ್ತು, ಅಂತರಾಷ್ಟ್ರೀಯ ಕಾನೂನು ಮತ್ತು ರಾಷ್ಟ್ರಗಳ ಪರಮಾಧಿಕಾರದ ಸಮಾನತೆಯ ತತ್ವಗಳಿಗೆ ಆಳವಾದ ಗೌರವವನ್ನು ಹೊಂದಿದೆ. ವಿಶ್ವಸಂಸ್ಥೆಯಿಂದ ಪ್ರತಿನಿಧಿಸಲಾದ ಇತರ ರಾಷ್ಟ್ರಗಳ ಆಂತರಿಕ ವ್ಯವಹಾರಗಳಲ್ಲಿ ಹಸ್ತಕ್ಷೇಪ ಮಾಡದಿರುವುದು ವಿಶ್ವಸಂಸ್ಥೆ ಅಂಗೀಕರಿಸಿದ ನಿಶ್ಯಸ್ತ್ರೀಕರಣವನ್ನು ಬೆಂಬಲಿಸಿದೆ, ಜೊತೆಗೆ ವಿಶ್ವಸಂಸ್ಥೆ ಮುಂದೆ ಪರಮಾಣು ನಿಶ್ಯಸ್ತ್ರೀಕರಣದ ಮಹತ್ವಾಕಾಂಕ್ಷೆಯ ಕಾರ್ಯಕ್ರಮವನ್ನು ಪ್ರಸ್ತಾಪಿಸಿದೆ. ಭಾರತ ಇಂದಿಗೂ ಸಾರ್ವತ್ರಿಕ ನಿಶ್ಯಸ್ತ್ರೀಕರಣಕ್ಕೆ ಬದ್ಧವಾಗಿದೆ, ವಿಶ್ವಸಂಸ್ಥೆಯಶಾಂತಿಪಾಲನ ಕಾರ್ಯಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವ ಮೂಲಕ ವಿಶ್ವಸಂಸ್ಥೆಯು ವಿಶ್ವಶಾಂತಿಯನ್ನು ಕಾಪಾಡುವಲ್ಲಿ ಭಾರತ ಪ್ರಮುಖವಾದ ಪಾತ್ರವಹಿಸುತ್ತಾ ಬಂದಿದೆ. ಭದ್ರತಾ ಮಂಡಳಿಯನ್ನು ಹೆಚ್ಚು ವಾಸ್ತವಿಕ ಮತ್ತು ಪ್ರಜಾಸತ್ತಾತ್ಮಕವಾಗಿಸಲು ಭದ್ರತಾ ಮಂಡಳಿ ಮತ್ತು ಇತರ ವಿಶ್ವಸಂಸ್ಥೆಯ ಅಂಗಗಳ ಸುಧಾರಣೆಯನ್ನು ಪ್ರಸ್ತಾಪಿಸುತ್ತಾ ಬಂದಿದೆ ಮತ್ತು ಬೆಂಬಲ ನೀಡುತ್ತಾ ಬಂದಿದೆ. ಮುಖ್ಯವಾಗಿ ಭದ್ರತಾ ಮಂಡಳಿಯಲ್ಲಿ ಭಾರತ ಖಾಯಂ ಸದಸ್ಯತ್ವದ ಹಕ್ಕುದಾರರಲ್ಲಿ ಒಂದಾಗಿದೆ.

**ಉಪಸಂಹಾರ**

ಜವಹರ್‌ಲಾಲ್ ನೆಹರು ಅವರು ಸ್ವಾತಂತ್ರ್ಯದ ನಂತರ ಆಧುನಿಕ ಭಾರತದ ವಾಸ್ತುಶಿಲ್ಪಿಯಾಗಿದ್ದರು, ದೇಶದ ಅಂತರಿಕ ಪರಿಸ್ಥಿಯನ್ನು ನಿಬಾಯಿಸುವುದರ ಜೊತೆಗೆ ವಿದೇಶಿ ಸಂಬಂಧಗಳು ಅಂದರೆ ಬಾಹ್ಯ ಸಂಬಂಧಗಳಲ್ಲಿಯೂ ಪ್ರಮುಖವಾದ ಪಾತ್ರವನ್ನು ವಹಿಸಿದರು. ಭಾರತಕ್ಕೆ ಅಗತ್ಯವಾದ ವಿದೇಶಿ ನೀತಿಗಳನ್ನು ರೂಪಿಸಿ ಅದನ್ನು ಕಾರ್ಯಗತಗೊಳಿಸಿದರು. ಇವರು ರೂಪಿಸಿದ ನೀತಿಗಳು ಇಂದಿಗೂ ಮಹತ್ವವನ್ನು ಪಡೆದುಕೊಂಡಿವೆ. ಅಲಿಪ್ತ ನೀತಿ, ಪಂಚಶೀಲತತ್ವ, ವಿಶ್ವಸಂಸ್ಥೆಯಲ್ಲಿನ ನಂಬಿಕೆ, ವರ್ಣಭೇದನೀತಿಗೆ ವಿರೋಧ, ಸಾಮ್ರಾಜ್ಯಶಾಹಿ

ಮತ್ತು ವಸಾಹತುಶಾಹಿಗೆ ವಿರೋಧ, ಈ ವಿದೇಶಿ ನೀತಿಗಳು ಭಾರತದ ಆತ್ಮವಾಗಿವೆ. ಜೊತೆಗೆ ಶಾಂತಿಯುತ ಸಹಬಾಳ್ವೆಯ ತತ್ವವನ್ನು ವಿಶ್ವಸಂಸ್ಥೆ ತನ್ನ ಚಾರ್ಟರ್‌ನಲ್ಲಿ ಅಳವಡಿಕೆ ಮಾಡಿಕೊಂಡಿದೆ. ಶೀತಲ ಯುದ್ಧದ ಸಂದರ್ಭದಲ್ಲಿ ಸೈದ್ಧಾಂತಿಕ ವಿಚಾರಗಳಿಗೆ ಬದ್ಧವಾಗಿರದೆ ಯಾವುದೇ ಮಿಲಿಟರಿ ಕೂಟಗಳಿಗೆ ಸೇರದೆ ಭಾರತವನ್ನು ಮುನ್ನೆಡೆಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಭಾರತದ ವಿದೇಶಾಂಗ ನೀತಿಗೆ ಇವರು ಒಂದು ಭದ್ರವಾದ ತಳಹದಿಯನ್ನು ಹಾಕಿಕೊಡುವುದರ ಮೂಲಕ ಭಾರತದ ವಿದೇಶಾಂಗ ನೀತಿಗೆ ಅಪಾರವಾದ ಕೂಡುಗೆಯನ್ನು ನೀಡಿದರು. ಆದುದರಿಂದಲೇ ಇವರನ್ನು ಭಾರತದ ವಿದೇಶಾಂಗ ನೀತಿಯ ಶಿಲ್ಪಿ ಎಂದು ಕರೆಯುತ್ತಾರೆ.

**ಪರಮರ್ಶಾನ ಗ್ರಂಥಗಳು:**


- ದೇವೆಗೌಡ ಟಿ.ಡಿ. (೨೦೧೪). ಅಂತರಾಷ್ಟ್ರೀಯ ಸಂಬಂಧಗಳು. ಚೆತನ್‌ಬುಕ್ ಹೌಸ್.
- ಹಾಲಪ್ಪ (2007). *ಅಂತರಾಷ್ಟ್ರೀಯ ಸಂಬಂಧಗಳು.* ವಿದ್ಯಾನಿಧಿ ಪ್ರಕಾಶನ.
- ಜಯರಾಮ್. (2008). *ಅಂತರಾಷ್ಟ್ರೀಯ ಸಂಬಂಧಗಳು ಮತ್ತು ಸಿದ್ಧಾಂತಗಳ ಪರಿಕಲ್ಪನೆ.* ಕಣ್ವ ಪ್ರಕಾಶನ.
- ಸುರೇಶ್. ಕೆ.ಜೆ. (2012). *ಅಂತರಾಷ್ಟ್ರೀಯ ಸಂಬಂಧಗಳು.* ಲಕ್ಷ್ಮಿಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್.
- Dethe, V. (2018). Nehru contribution to Indian's foreign policy. *Journal of Emerging Technologies and Innovative Research*, *5*(2), 1237–41. https://www.jetir.org/papers/JETIR1802254.pdf
- *Jawaharlal Nehru's foreign policy*. (n.d.). https://www.mapsofindia.com/personalities/nehru/foreign-policy.html
- McLane, J. R., & Gopal, S. (1981). Jawaharlal Nehru: A Biography. *The American Historical Review*, *86*(2), 442. https://doi.org/10.2307/1857554
- Power, P. F. (1964). Indian Foreign Policy: The Age of Nehru. *The Review of Politics*, *26*(2), 257–286. https://doi.org/10.1017/s0034670500004770